**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 684 |
| ಸದಸ್ಯರ ಹೆಸರು | : | ಶ್ರೀ ಮುನಿರಾಜು ಗೌಡ ಪಿ.ಎಂ |
| ಉತ್ತರಿಸುವ ದಿನಾಂಕ | : | 17-09-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಭಿಕ್ಷುಕರ ಕ್ಷೇಮಾಭಿವೃದ್ಧಿ ಸಂಘಕ್ಕೆ ಒಳಪಡುವ ಸ್ವತ್ತುಗಳು ಯಾವುವು; (ಸ್ವತ್ತುವಾರು ಜಿಲ್ಲಾವಾರು ವಿವರ ನೀಡುವುದು) | ಸಮಾಜ ಕಲ್ಯಾಣ ಇಲಾಖೆಯ ಅಧೀನದಲ್ಲಿ ಬರುವ ಕೇಂದ್ರ ಪರಿಹಾರ ಸಮಿತಿಯಿಂದ ಆಡಳಿತ ವ್ಯಾಪ್ತಿಯ 14 ನಿರಾಶ್ರಿತರ ಪರಿಹಾರ ಕೇಂದ್ರಗಳಿಗೆ ಸೇರಿದ ಸ್ವತ್ತು (ಜಮೀನಿನ) ಜಿಲ್ಲಾವಾರು ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ. |
| ಆ) | ಸದರಿ ಸಂಘದ ಸ್ವತ್ತುಗಳು ಒತ್ತುವಾರಿಯಾಗಿದೆಯೇ; (ಸ್ವತ್ತುವಾರು, ಜಿಲ್ಲಾವಾರು ವಿವರ ನೀಡುವುದು) | ಒತ್ತುವರಿಯಾಗಿರುವ ಜಮೀನಿನ ವಿವರ ಹಾಗೂ ಒತ್ತುವರಿಯನ್ನು ತೆರವುಗೊಳಸಲು ಕೈಗೊಂಡ ಕ್ರಮಗಳ ವಿವರಗಳನ್ನು ಅನುಬಂಧ-2 ರಲ್ಲಿ ನೀಡಿದೆ. |
| ಇ) | ಹಾಗಿದ್ದಲ್ಲಿ, ಒತ್ತುವರಿಯನ್ನು ತೆರವುಗೊಳಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | |

**ಸಕಇ 392 ಎಸ್‌ಎಲ್‌ಪಿ 2021**

**(ಕೋಟ ಶ್ರೀನಿವಾಸ ಪೂಜಾರಿ)**
**ಸಮಾಜ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

# ಅನುಬಂಧ - 1

## ಕೇಂದ್ರ ಪರಿಹಾರ ಸಮಿತಿ ಅಧೀನದಲ್ಲಿ ಬರುವ 14 ನಿರಾಶ್ರಿತರ ಪರಿಹಾರ ಕೇಂದ್ರಗಳ ಸ್ವತ್ತಿನ (ಜಮೀನಿನ) ವಿವರಗಳು

| ಕ್ರ. ಸಂ | ಜಿಲ್ಲಾ ನಿರಾಶ್ರಿತರ ಪರಿಹಾರ ಕೇಂದ್ರಗಳು | ಕೇಂದ್ರಗಳ ವಶದಲ್ಲಿರುವ ಜಮೀನಿನ ವಿಸ್ತೀರ್ಣ (ಎಕರೆ/ ಗುಂಟೆಗಳಲ್ಲಿ) |
|---|---|---|
| 1 | ಬೆಂಗಳೂರು | 222.36 |
| 2 | ಹುಬ್ಬಳ್ಳಿ–ಧಾರವಾಡ | 05.00 |
| 3 | ಮೈಸೂರು | 10.31 |
| 4 | ಮಂಗಳೂರು (ದ.ಕ) | 10.90 (ಸೆಂಟ್ಸ್) |
| 5 | ಬೆಳಗಾವಿ | 19.21 |
| 6 | ಕಲ್ಬುರ್ಗಿ | 3.00 |
| 7 | ಬಳ್ಳಾರಿ | 4.00 |
| 8 | ದಾವಣಗೆರೆ | 10.00 |
| 9 | ವಿಜಯಪುರ | 4.00 |
| 10 | ಶಿವಮೊಗ್ಗ | 39.28 |
| 11 | ತುಮಕೂರು | 4.10 |
| 12 | ಕೋಲಾರ | 12.15 |
| 13 | ಚಿತ್ರದುರ್ಗ | 14.00 |
| 14 | ರಾಯಚೂರು | 10.00 |

## ಅನುಬಂಧ- 2

### ಬೆಂಗಳೂರು ನಿರಾಶ್ರಿತರ ಪರಿಹಾರ ಕೇಂದ್ರದಲ್ಲಿ ಜಮೀನು ಒತ್ತುವರಿಯಾಗಿರುವ ಬಗ್ಗೆ.

| ಕ್ರ. ಸಂ | ಜಿಲ್ಲಾ ನಿರಾಶ್ರಿತರ ಪರಿಹಾರ ಕೇಂದ್ರಗಳು | ಕೇಂದ್ರದ ವಶದಲ್ಲಿರುವ ಜಮೀನಿನ ವಿಸ್ತೀರ್ಣ (ಎಕರೆ/ ಗುಂಟೆಗಳಲ್ಲಿ) | ಒತ್ತುವರಿ ಜಮೀನಿನ ವಿವರ |
|---|---|---|---|
| 1 | ಬೆಂಗಳೂರು | 222.36 | 1) ಶ್ರೀಗಂಧಕಾವಲು ಗ್ರಾಮದ ಸರ್ವೆ ನಂ.68/1 ರಲ್ಲಿ 10 ಗುಂಟೆ ಜಮೀನನ್ನು ಶ್ರೀ ಕೆ.ಎನ್.ದಯಾನಂದಮೂರ್ತಿ ಎಂಬುವವರು ಅನಧಿಕೃತವಾಗಿ ಒತ್ತುವರಿ ಮಾಡಲಾಗಿದ್ದು, ಈ ಸಂಬಂಧ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ: W.P.No.8679/2007 ರಲ್ಲಿ ವಿಚಾರಣೆಯು ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ಕೇಂದ್ರ ಪರಿಹಾರ ಸಮಿತಿ ಪರವಾಗಿ ದಿನಾಂಕ:03-11-2014 ರಲ್ಲಿ ತೀರ್ಪು ನೀಡಲಾಗಿದೆ. ಸದರಿ ತೀರ್ಪಿನ ವಿರುದ್ಧ ಶ್ರೀ ಕೆ.ಎನ್.ದಯಾನಂದ ಮೂರ್ತಿ ರವರು ದಿನಾಂಕ: 05-01-2015 ರಲ್ಲಿ ಕರ್ನಾಟಕ ಉಚ್ಚನ್ಯಾಯಾಲದಲ್ಲಿ ಪ್ರಕರಣ ಕುರಿತು RFA:24/2015 ರಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಸದರಿ ಮೇಲ್ಮನವಿಯನ್ನು ಘನ ನ್ಯಾಯಾಲಯವು ದಿನಾಂಕ: 04-03-2020 ರಲ್ಲಿ ಕಾಗದ ಪುಸ್ತಕವನ್ನು 4 ವಾರಗಳಲ್ಲಿ ಸಲ್ಲಿಸದಿದ್ದರೆ ವಜಾಗೊಳಿಸಲಾಗುತ್ತದೆ ಎಂದು ಆದೇಶಿಸಲಾಗಿದೆ. ಒತ್ತುವರಿಯನ್ನು ತೆರವುಗೊಳಿಸಬೇಕಾಗಿರುತ್ತದೆ.<br><br>2) ಶ್ರೀ ಜಿ.ಕೃಷ್ಣಪ್ಪ ಎಂಬುವವರು ಶ್ರೀಗಂಧದಕಾವಲು ಗ್ರಾಮದ ಸರ್ವೆ ನಂ.51 ರಲ್ಲಿ 1 ಎಕರೆ 6 ಗುಂಟೆ ಜಮೀನು ಒತ್ತುವರಿ ಮಾಡಿಕೊಂಡಿದ್ದು, ಸದರಿ ಒತ್ತುವರಿ ಮಾಡಿಕೊಂಡಿರುವ ಜಮೀನು ಅವರಿಗೆ ಸೇರಬೇಕಾದ ಸ್ವತ್ತು ಎಂದು ಅರ್ಜಿದಾದರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ; RFA No.1050 / 2011 ದಾಖಲಿಸಲಾಗಿದೆ. ಈ ಅರ್ಜಿಗೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲದ ಆದೇಶ ದಿನಾಂಕ: 23-04-2014 ರಲ್ಲಿ ನ್ಯಾಯಾಲಯವು ಸದರಿ ಮೊಕದ್ದಮೆಯನ್ನು Dispose ಮಾಡಲಾಗಿದೆ. ಒತ್ತುವರಿಯನ್ನು ತೆರವುಗೊಳಿಸಬೇಕಾಗಿರುತ್ತದೆ.<br><br>3) ಶ್ರೀ ರಾಮಕೃಷ್ಣ ಎಂಬುವವರು ಶ್ರೀಗಂಧಕಾವಲು ಗ್ರಾಮದ ಸರ್ವೆ ನಂ.70/3 ಎ ರಲ್ಲಿ 0.32 ಗುಂಟೆ ಜಮೀನು ಒತ್ತುವರಿಯಾಗಿರುವ ಬಗ್ಗೆ ಕರ್ನಾಟಕ ಭೂ ಕಬಳಿಕೆ ನಿಷೇಧ ಕಾಯಿದೆಯ ವಿಶೇಷ ನ್ಯಾಯಾಲಯದಲ್ಲಿ LGC: (P) 726/2019 ರಂತೆ ದೂರು ದಾಖಲಾಸಿರುವುದರಿಂದ, ಬೆಂಗಳೂರು ಉತ್ತರ ತಾಲ್ಲೂಕು ತಹಶೀಲ್ದಾರ್ ರವರ ಜ್ಞಾಪನ ಪತ್ರದಲ್ಲಿ ಈ ಬಗ್ಗೆ ಸರ್ವೆ ಮಾಡಿ ವಿವರವಾದ ವರದಿ ಸಲ್ಲಿಸುವಂತೆ, ಸೂಚಿಸಿರುವ ಪ್ರತಿಯನ್ನು ಅಧೀಕ್ಷಕರು, ಬೆಂಗಳೂರು ನಿರಾಶ್ರಿತರ ಪರಿಹಾರ ಕೇಂದ್ರ ರವರ ಮಾಹಿತಿಗಾಗಿ ಸಲ್ಲಿಸಿದ್ದು, ಅಧೀಕ್ಷಕರು, ನಿರಾಶ್ರಿತರ ಪರಿಹಾರ ಕೇಂದ್ರ, ಬೆಂಗಳೂರು ರವರ ಪತ್ರ ಸಂಖ್ಯೆ ನಿಪಕೇ:ಬೆಂ:ಸಿಆರ್:21:2019-20 ದಿನಾಂಕ:07-03-2020 ರಲ್ಲಿ "ಟೋಟಲ್ ಸ್ಟೇಷನ್ ಸರ್ವೆ" ಮಾಡಿಸಿ ಹದ್ದುಬಸ್ತು ಮಾಡಲು ಕೋರಲಾಗಿದೆ. ಈ ಬಗ್ಗೆ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರು ಸರ್ವೆಕಾರ್ಯ ಕೈಗೊಂಡಿದ್ದು, ಸರಹದ್ದು ಗುರುತಿಸುವ ಹಂತದಲ್ಲಿರುತ್ತದೆ. |

| | | | |
|---|---|---|---|
| | | | 4) ಸಜ್ಜೆ ಪಾಳ್ಯ ಗ್ರಾಮದ ಸರ್ವೆ ನಂ.3 ರಲ್ಲಿ 0.27 ಗುಂಟೆ ಜಮೀನನ್ನು "ದಿ ದೇವರಾಜು ಅರಸು ಕಾಲೋನಿ" ಕೊಳಚೆ ಪ್ರದೇಶಕ್ಕಾಗಿ ಮಾನ್ಯ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ಆದೇಶ ಹೊರಡಿಸಲಾಗಿರುವುದನ್ನು ಕೇಂದ್ರ ಪರಿಹಾರ ಸಮಿತಿವತಿಯಿಂದ ಸದರಿ ಆದೇಶ ರದ್ದುಪಡಿಸಲು W.P:55797:2017 ರಲ್ಲಿ ದಾವೆ ದಾಖಲಿಸಲಾಗಿದೆ. ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ, ಘನ ಉಚ್ಚನ್ಯಾಯಾಲಯವು ದಿನಾಂಕ: 05-01-2018 ರಲ್ಲಿ ಜಿಲ್ಲಾಧಿಕಾರಿಗಳ ಅಧಿಸೂಚನೆಗೆ ತಡೆಯಾಜ್ಞೆಯನ್ನು ನೀಡಿದ್ದು, ಸದರಿ ಪ್ರಕರಣವು ವಿಚಾರಣೆ ಹಂತದಲ್ಲಿದೆ.<br><br>5) ಶ್ರೀ ಬಿ.ರಾಮಕೃಷ್ಣಪ್ಪ ಎಂಬುವವರು ಬೆಂಗಳೂರು ನಿರಾಶ್ರಿತರ ಪರಿಹಾರ ಕೇಂದ್ರಕ್ಕೆ ಸೇರಿದ ಸರ್ವೆ ನಂ.70/3 ಸೇರಿದ ಜಮೀನು ಒತ್ತುವರಿ ಮಾಡಿಕೊಂಡಿದ್ದು, ಸದರಿ ಒತ್ತುವರಿ ಜಮೀನು ತೆರವುಗೊಳಿಸುವ ಸಂಬಂಧ ಕೇಂದ್ರ ಪರಿಹಾರ ಸಮಿತಿವತಿಯಿಂದ ಮಾನ್ಯ ಉಚ್ಚ ನ್ಯಾಯಾಲಯದ ಅರ್ಜಿ ಸಂಖ್ಯೆ: RFA:1869/2011 ರಲ್ಲಿ ದಾಖಲಿಸಿದ್ದು, ಪ್ರಕರಣವು ಅಂತಿಮ ವಿಚಾರಣಾ ಹಂತದಲ್ಲಿರುತ್ತದೆ. |